ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ವಿಜಯಪುರ-ಬಾಗಲಕೋಟೆ ಜಿಲ್ಲೆಗಳಲ್ಲಿ ಪ್ರವಾಹದಿಂದ ಉಂಟಾದ ಹಾನಿಯ ಕುರಿತು

ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

228 (202) ಮಾನ್ಯ ಕಂದಾಯ ಸಚಿವರು ಈ ವಿಷಯಗಳÀನ್ನು ದಯವಿಟ್ಟು ತಿಳಿಸುವರೆ:-

(ಅ) ವಿಜಯಪುರ-ಬಾಗಲಕೋಟೆ ಜಿಲ್ಲೆಗಳಲ್ಲಿ 2019ರ ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ವಿವಿಧ ನದಿಗಳ ಪ್ರವಾಹ ಹಾಗೂ ಮಳೆಯಿಂದಾಗಿ ಎಷ್ಟು ಗ್ರಾಮಗಳು ಮುಳುಗಡೆಯಾಗಿವೆ ; ಇದರಿಂದಾಗಿ ಒಟ್ಟು ಎಷ್ಟು ಹಾನಿ ಸಂಭವಿಸಿದೆ ; ಜನ ಮತ್ತು ಜಾನುವಾರುಗಳ ಪ್ರಾಣ ಹಾನಿ ಎಷ್ಟು ; (ಸಂಪೂರ್ಣ ವಿವರಗಳನ್ನು ನೀಡುವುದು)

(ಆ) ಪ್ರವಾಹದಿಂದಾಗಿ ಒಟ್ಟು ಎಷ್ಟು ಪ್ರಮಾಣದಲ್ಲಿ ರೈತರ ಬೆಳೆ ಹಾನಿ ಆಗಿದೆ ; ಎಷ್ಟು ಮನೆಗಳು ಸಂಪೂರ್ಣವಾಗಿ ಹಾನಿ ಆಗಿವೆ ಮತ್ತು ಎಷ್ಟು ಮನೆಗಳು ಭಾಗಶಃ ಹಾನಿಯಾಗಿವೆ ; (ಗ್ರಾಮವಾರು ಮಾಹಿತಿ ನೀಡುವುದು)

(ಇ) ಪುನರ್ ವಸತಿ ಕಲ್ಪಿಸಲಾದ ಗ್ರಾಮಗಳ ಸಂಖ್ಯೆ ಎಷ್ಟು ಮತ್ತು ಆ ಗ್ರಾಮಗಳು ಯಾವುವು ; ಮತ್ತು ಎಷ್ಟು ಗ್ರಾಮಗಳನ್ನು ಹಾಗೂ ಜನರನ್ನು ಸ್ಥಳಾಂತರಿಸಲಾಗಿದೆ ;

(ಈ) ಈ ಕುರಿತು ಕೈಗೊಂಡ ಪರಿಹಾರ ಕ್ರಮಗಳು ಏನು ; ರೈತರಿಗೆ ನೀಡಲಾದ ಬೆಳೆ ನಷ್ಟ ಪರಿಹಾರ ಎಷ್ಟು ; ಎಷ್ಟು ಮನೆಗಳನ್ನು ನಿರ್ಮಾಣ ಮಾಡಲಾಗಿದೆ ; ಪುನರ್ ವಸತಿ ಶೆಡ್‌ಗಳಲ್ಲಿ ಜನರಿಗೆ ಒದಗಿಸಲಾದ ಮೂಲಭೂತ ಸೌಲಭ್ಯಗಳು ಯಾವುವು ;

(ಉ) ಇನ್ನು ಎಷ್ಟು ಗ್ರಾಮಗಳನ್ನು ಸ್ಥಳಾಂತರ ಮಾಡಬೇಕಾಗಿದೆ ;

(ಊ) ಪ್ರವಾಹದಿಂದ ಹಾನಿಗೊಳಗಾದ ಶಾಲೆಗಳ ಸಂಖ್ಯೆ ಎಷ್ಟು ; ಶಾಲೆಗಳ ದುರಸ್ತಿಗೆ ಯಾವ ಕ್ರಮ ಕೈಗೊಳ್ಳಲಾಗಿದೆ ; ಎಷ್ಟು ಶಾಲೆಗಳನ್ನು ದುರಸ್ತಿಗೊಳಿಸಲಾಗಿದೆ ಹಾಗೂ ಇದಕ್ಕಾಗಿ ಬಿಡುಗಡೆಯಾದ ಹಣ ಎಷ್ಟು ;

(ಋ) ಪ್ರವಾಹದಿಂದ ಹಾನಿಗೊಳಗಾದ ರಸ್ತೆ ಮತ್ತು ಸೇತುವೆಗಳ ವಿವರ ನೀಡುವುದು ಮತ್ತು ಅವುಗಳ ದುರಸ್ತಿಗೆ ಕೈಗೊಂಡ ಕ್ರಮಗಳೇನು ಮತ್ತು ಬಿಡುಗಡೆಯಾದ ಹಣ ಎಷ್ಟು ?